# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | 380 |
| ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 03.02.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕೃಷಿಯಲ್ಲಿ ಕಾಲಕಾಲಕ್ಕೆ ಮಣ್ಣು ನೀರು ಪರೀಕ್ಷಿಸಲು ಮತ್ತು ಇತರೆ ತಾಂತ್ರಿಕ ನೆರವಿಗಾಗಿ "ಸಂಚಾರಿ ಕೃಷಿ ಹೆಲ್ತ್ ಕ್ಲಿನಿಕ್" ಗಳನ್ನು ಪ್ರಾರಂಭಿಸುವ ಉದ್ದೇಶ ಸರ್ಕಾರಕ್ಕಿದೆಯೇ; | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ ಕೃಷಿ ಬೆಳೆಗಳಲ್ಲಿನ ಕೀಟ, ರೋಗ, ಕಳೆ ಬಾಧೆ ನಿರ್ವಹಣೆ ಸಸ್ಯ ಪೋಷಕಾಂಶಗಳ ಕೊರತೆ, ಮಣ್ಣು ಮತ್ತಿತರ ತಾಂತ್ರಿಕ ಸಹಾಯವನ್ನು ಕ್ಷೇತ್ರ ಮಟ್ಟದಲ್ಲಿಯೇ ರೈತರಿಗೆ ಒದಗಿಸುವ ನಿಟ್ಟಿನಲ್ಲಿ ಸಂಚಾರಿ ಸಸ್ಯ ಆರೋಗ್ಯ ಚಿಕಿತ್ಸಾಲಯಗಳ ಸ್ಥಾಪನೆಯನ್ನು ಮಾಡಲಾಗಿರುತ್ತದೆ. |
| ಆ. | ಈ ತರಹದ ಕ್ಲಿನಿಕ್ ಗಳ ಉದ್ದೇಶಕ್ಕಾಗಿ ಮೀಸಲಿಡಲಾದ ಹಣವೆಷ್ಟು; | ಜಿಲ್ಲಾ ಮಟ್ಟದ ಸಂಚಾರಿ ಸಸ್ಯ ಆರೋಗ್ಯ ಚಿಕಿತ್ಸಾಲಯಗಳ ಸ್ಥಾಪನೆಗಾಗಿ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ ರೂ.8.00 ಕೋಟಿಗಳ ಅನುದಾನವನ್ನು ಒದಗಿಸಲಾಗಿರುತ್ತದೆ.<br>ಕೊಪ್ಪಳ ಜಿಲ್ಲೆಯಲ್ಲಿ ಹೋಬಳಿ ಮಟ್ಟದಲ್ಲಿ ಸಂಚಾರಿ ಸಸ್ಯ ಆರೋಗ್ಯ ಚಿಕಿತ್ಸಾಲಯಗಳ ಸ್ಥಾಪನೆಗಾಗಿ 4.72 ಕೋಟಿಗಳ ಅನುದಾನವನ್ನು ಕೊಪ್ಪಳ ಜಿಲ್ಲಾ ಖನಿಜ ಪ್ರತಿಷ್ಠಾನದಡಿ ಒದಗಿಸಲಾಗಿರುತ್ತದೆ. |
| ಇ. | ಪ್ರಸಕ್ತ ಸಾಲಿನಲ್ಲಿ ಸದರಿ ಉದ್ದೇಶಕ್ಕಾಗಿ ಖರೀದಿಸಲಾದ ಉಪಯುಕ್ತ ವಾಹನಗಳು ಎಷ್ಟು; | 2019-20ನೇ ಸಾಲಿನಲ್ಲಿ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ 40 ವಾಹನಗಳನ್ನು ಮತ್ತು 2020-21ನೇ ಸಾಲಿನಲ್ಲಿ ಕೊಪ್ಪಳ ಜಿಲ್ಲಾ ಖನಿಜ ಪ್ರತಿಷ್ಠಾನ ಅನುದಾನದಡಿ 20 ವಾಹನಗಳನ್ನು ಖರೀದಿಸಲಾಗಿರುತ್ತದೆ. |
| ಈ. | ಈ ಯೋಜನೆಯಡಿಯಲ್ಲಿ ಎಷ್ಟು ಹಳ್ಳಿಗಳಿಗೆ ಭೇಟಿ ನೀಡಿ ರೈತರಿಗೆ ಸಹಾಯ ಮಾಡಲಾಗಿದೆ? (ಜಿಲ್ಲಾವಾರು ಮಾಹಿತಿ ನೀಡುವುದು) | ಸಂಚಾರಿ ಸಸ್ಯ ಆರೋಗ್ಯ ಚಿಕಿತ್ಸಾಲಯಗಳ ಸ್ಥಾಪನೆಯ ನಂತರ ಜಿಲ್ಲಾವಾರು ಕ್ಷೇತ್ರ ಭೇಟಿ ನೀಡಿದ ವಿವರ ಅನುಬಂಧದಲ್ಲಿ ನೀಡಿದೆ. |

AGRI-AML/32/2021

(ಬಿ.ಸಿ. ಪಾಟೀಲ್)

ಕೃಷಿ ಸಚಿವರು

ವಿಧಾನ ಪರಿಷತ್ತಿನ ಪ್ರಶ್ನೆ ಸಂಖ್ಯೆ:380ಕ್ಕೆ ಅನುಬಂಧ

ಸಂಚಾರಿ ಸಸ್ಯ ಆರೋಗ್ಯ ಚಿಕಿತ್ಸಾಲಯಗಳ ಯೋಜನೆಯಡಿ ಗ್ರಾಮಗಳಿಗೆ ಭೇಟಿ ನೀಡಿದ ವಿವರ

| ಕ್ರ.ಸಂ | ಜಿಲ್ಲೆ | ಭೇಟಿ ಮಾಡಿದ ಗ್ರಾಮಗಳ ಸಂಖ್ಯೆ | ಒಟ್ಟು ರೈತರ ಸಂಖ್ಯೆ |
|---|---|---|---|
| 1 | ಬಾಗಲಕೋಟೆ | 6 | 120 |
| 2 | ಬೆಂಗಳೂರು | 12 | 49 |
| 3 | ಬೆಳಗಾವಿ | 1 | 5 |
| 4 | ಬಳ್ಳಾರಿ | 3 | 7 |
| 5 | ಬೀದರ | 24 | 156 |
| 6 | ವಿಜಯಪುರ | 24 | 109 |
| 7 | ಚಾಮರಾಜನಗರ | 4 | 4 |
| 8 | ಚಿಕ್ಕಬಳ್ಳಾಪುರ | 20 | 126 |
| 9 | ಚಿಕ್ಕಮಗಳೂರು | 8 | 29 |
| 10 | ಚಿತ್ರದುರ್ಗ | 2 | 5 |
| 11 | ದಕ್ಷಿಣಕನ್ನಡ | 0 | 0 |
| 12 | ದಾವಣಗೆರೆ | 16 | 38 |
| 13 | ಧಾರವಾಡ | 15 | 156 |
| 14 | ಗದಗ | 18 | 54 |
| 15 | ಕಲಬುರ್ಗಿ | 22 | 113 |
| 16 | ಹಾಸನ | 10 | 55 |
| 17 | ಹಾವೇರಿ | 8 | 33 |
| 18 | ಕೊಡಗು | 0 | 0 |
| 19 | ಕೋಲಾರ | 14 | 272 |
| 20 | ಕೊಪ್ಪಳ | 131 | 1840 |
| 21 | ಮಂಡ್ಯ | 18 | 76 |
| 22 | ಮೈಸೂರು | 2 | 2 |
| 23 | ರಾಮನಗರ | 5 | 88 |
| 24 | ರಾಯಚೂರು | 8 | 57 |
| 25 | ಶಿವಮೊಗ್ಗ | 7 | 25 |
| 26 | ತುಮಕೂರು | 5 | 57 |
| 27 | ಉಡುಪಿ | 1 | 12 |
| 28 | ಉತ್ತರಕನ್ನಡ | 3 | 23 |
| 29 | ಯಾದಗಿರಿ | 2 | 25 |
| | ಒಟ್ಟು | **389** | **3536** |